# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 1540 |
| ಸದಸ್ಯರ ಹೆಸರು | : | ಶ್ರೀ ಸಲೀಂ ಅಹಮದ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 16-03-2022 |
| ಉತ್ತರಿಸುವ ಸಚಿವರು | : | ಕಂದಾಯ ಸಚಿವರು |

<table>
<tr><th>ಪ್ರಶ್ನೆ</th><th>ಉತ್ತರ</th></tr>
<tr><td>(ಅ) 2020-21 ರಲ್ಲಿ ಉಂಟಾದ ಅತಿವೃಷ್ಟಿಯಿಂದ ಧಾರವಾಡ, ಗದಗ, ಹಾವೇರಿ ಜಿಲ್ಲೆಗಳಲ್ಲಿ ಹಾನಿಗೊಳಗಾದ ರೈತರ ಸಂಖ್ಯೆ ಎಷ್ಟು ಹಾಗೂ ಜಮೀನಿನ ವಿಸ್ತೀರ್ಣವೆಷ್ಟು; ವಿಶೇಷವಾಗಿ ಮೆಣಸಿನಕಾಯಿ ಫಸಲಿಗೆ ಹಾನಿಯಾದ ವಿವರ ನೀಡುವುದು;</td><td>2020ನೇ ಸಾಲಿನ ಆಗಸ್ಟ್ ರಿಂದ ಅಕ್ಟೋಬರ್‌ವರೆಗೆ ಉಂಟಾದ ಅತಿವೃಷ್ಟಿಯಿಂದ ಧಾರವಾಡ ಜಿಲ್ಲೆಯಲ್ಲಿ 2,06,664 ಹೆಕ್ಟೇರ್, ಗದಗ ಜಿಲ್ಲೆಯಲ್ಲಿ 2,03,525 ಹೆಕ್ಟೇರ್ ಹಾಗೂ ಹಾವೇರಿ ಜಿಲ್ಲೆಯಲ್ಲಿ 32912 ಹೆಕ್ಟೇರ್ ಬೆಳೆಹಾನಿಯಾಗಿದ್ದು, ವಿಶೇಷವಾಗಿ ಮೆಣಸಿನಕಾಯಿ ಫಸಲಿಗೆ ಧಾರವಾಡ ಜಿಲ್ಲೆಯಲ್ಲಿ 4,014.31 ಹೆಕ್ಟೇರ್, ಗದಗ ಜಿಲ್ಲೆಯಲ್ಲಿ 11,246 ಹೆಕ್ಟೇರ್ ಹಾಗೂ ಹಾವೇರಿ ಜಿಲ್ಲೆಯಲ್ಲಿ 153 ಹೆಕ್ಟೇರ್ ಬೆಳೆಹಾನಿಯಾಗಿದೆ.</td></tr>
<tr><td>(ಆ) ಇದರಿಂದ ರೈತರ ಆರ್ಥಿಕ ಸ್ಥಿತಿ ಸಂಪೂರ್ಣವಾಗಿ ಕ್ಷೀಣಿಸಿದ್ದು, ರೈತರಿಗೆ ಉಂಟಾದ ನಷ್ಟವನ್ನು ಭರಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು;</td><td>2020ನೇ ಸಾಲಿನಲ್ಲಿ ಅತಿವೃಷ್ಟಿಯಿಂದ ಉಂಟಾದ ಬೆಳೆಹಾನಿಗೆ ಕೇಂದ್ರ ಸರ್ಕಾರದ SDRF / NDRF ಮಾರ್ಗಸೂಚಿಯನ್ವಯ ಪ್ರತಿ ಹೆಕ್ಟೇರ್‌ಗೆ ಈ ಕೆಳಕಂಡ ದರದಲ್ಲಿ ಇನ್‌ಪುಟ್ ಸಬ್ಸಿಡಿ ಪಾವತಿಸಲಾಗಿದೆ:<br><br><table><tr><th>ಬೆಳೆ ವಿಧ</th><th>ಮಾರ್ಗಸೂಚಿ ದರ</th></tr><tr><td>ಮಳೆಯಾಶ್ರಿತ</td><td>ರೂ.6,800/-</td></tr><tr><td>ನೀರಾವರಿ</td><td>ರೂ.13,500/-</td></tr><tr><td>ಬಹುವಾರ್ಷಿಕ</td><td>ರೂ.18,000/-</td></tr></table><br>ಮೇಲ್ಕಂಡ ದರದಲ್ಲಿ ಇನ್‌ಪುಟ್ ಸಬ್ಸಿಡಿ ಮೊತ್ತವನ್ನು ಪ್ರತಿ ರೈತರಿಗೆ ಗರಿಷ್ಠ 2 ಹೆಕ್ಟೇರ್‌ಗೆ ಸೀಮಿತಗೊಳಿಸಿ ಪಾವತಿಸಲಾಗಿದೆ.</td></tr>
<tr><td>(ಇ) ಭರಿಸಿದ್ದಲ್ಲಿ, ಎಷ್ಟು ಜನ ರೈತರಿಗೆ ಪರಿಹಾರವನ್ನು ನೀಡಲಾಗಿದೆ?</td><td>ಅತಿವೃಷ್ಟಿ / ಪ್ರವಾಹದಿಂದ ಉಂಟಾದ ಬೆಳೆಹಾನಿ ವಿವರವನ್ನು ಪರಿಹಾರ ತಂತ್ರಾಂಶದಲ್ಲಿ ದಾಖಲಿಸಿ ಫಲಾನುಭವಿಗಳ ಬ್ಯಾಂಕ್ ಖಾತೆಗೆ ನೇರವಾಗಿ ಇನ್‌ಪುಟ್ ಸಬ್ಸಿಡಿ ಮೊತ್ತ ಜಮೆಯಾಗುತ್ತದೆ. ಅದರಂತೆ ಧಾರವಾಡ ಜಿಲ್ಲೆಯಲ್ಲಿ 1,12,411 ರೈತರಿಗೆ ರೂ.100.44ಕೋಟಿ, ಗದಗ ಜಿಲ್ಲೆಯಲ್ಲಿ 1,12,377 ರೈತರಿಗೆ ರೂ.118.25 ಕೋಟಿ ಹಾಗೂ ಹಾವೇರಿ ಜಿಲ್ಲೆಯಲ್ಲಿ 19,928 ರೈತರಿಗೆ ರೂ.10.71 ಕೋಟಿ ಇನ್‌ಪುಟ್ ಸಬ್ಸಿಡಿ ನೇರವಾಗಿ ಬ್ಯಾಂಕ್ ಖಾತೆಗೆ ಜಮೆಮಾಡಲಾಗಿದೆ.</td></tr>
</table>

*(ಕೃಷಿ ಇಲಾಖೆಯಿಂದ ವರ್ಗಾವಣೆಗೊಂಡಿದೆ)*

ಕಂಇ 114 ಟಿಎನ್‌ಆರ್ 2022

(ಆರ್. ಅಶೋಕ)
ಕಂದಾಯ ಸಚಿವರು